# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 191 |
| ಸದಸ್ಯರ ಹೆಸರು | : | ಶ್ರೀ ಲಹರ್ ಸಿಂಗ್ ಸಿರೋಯಾ |
| ಉತ್ತರಿಸಬೇಕಾದ ಸಚಿವರು | : | ಸಾರಿಗೆ ಸಚಿವರು |
| ಉತ್ತರಿಸಬೇಕಾದ ದಿನಾಂಕ | : | 18-07-2019 |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಬಿ.ಎಂ.ಟಿ.ಸಿ ಸೇರಿದಂತೆ ಸಾರಿಗೆ ಸಂಸ್ಥೆಯ ಬಸ್ ಪ್ರಯಾಣ ದರ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಮುಂದಿದೆಯೇ: | ಸಾರಿಗೆ ಸಂಸ್ಥೆಗಳ ಬಸ್ ಪ್ರಯಾಣ ದರ ಹೆಚ್ಚಿಸುವ ಪ್ರಸ್ತಾವನೆ ಸರ್ಕಾರದ ಪರಿಶೀಲನೆಯಲ್ಲಿರುತ್ತದೆ. |
| ಆ) | ಹೌದಾದಲ್ಲಿ ಅದಕ್ಕೆ ಕಾರಣಗಳೇನು: | ಸಾರಿಗೆ ಸಂಸ್ಥೆಗಳ ಬಸ್ ಪ್ರಯಾಣ ದರಗಳನ್ನು ದಿನಾಂಕ:4.5.2014 ರಿಂದ ಜಾರಿಗೆ ಬರುವಂತೆ 7.96% ರಷ್ಟು ಹೆಚ್ಚಿಸಲಾಗಿತ್ತು. ನಂತರ ದಿನಾಂಕ 10.1.2015 ರಿಂದ ಜಾರಿಗೆ ಬರುವಂತೆ 2% ರಷ್ಟು ಬಸ್ ಪ್ರಯಾಣ ದರ ಇಳಿಸಲಾಗಿತ್ತು.<br><br>2015ನೇ ಸಾಲಿನಿಂದ ಇದುವರೆವಿಗೆ ಬಸ್ ಪ್ರಯಾಣ ದರಗಳನ್ನು ಪರಿಷ್ಕರಿಸಿರುವುದಿಲ್ಲ. ಆದರೆ, ಇಂಧನ ಬೆಲೆಯಲ್ಲಿ ಹಲವಾರು ಬಾರಿ ಹೆಚ್ಚಳವಾಗಿದ್ದು ಮತ್ತು ನೌಕರರ ತುಟ್ಟಿಭತ್ಯೆಯಲ್ಲಿ ಗಣನೀಯ ಪ್ರಮಾಣದಲ್ಲಿ ಏರಿಕೆಯಾಗಿರುವುದರಿಂದ ಸಾರಿಗೆ ಸಂಸ್ಥೆಗಳ ವೆಚ್ಚವನ್ನು ಸರಿದೂಗಿಸುವ ನಿಟ್ಟಿನಲ್ಲಿ ಪ್ರಯಾಣ ದರವನ್ನು ಹೆಚ್ಚಿಸುವ ಪ್ರಸ್ತಾವನೆ ಇರುತ್ತದೆ. |
| ಇ) | ನಗರದಲ್ಲಿ ಜನರು ಸಾರ್ವಜನಿಕ ಸಾರಿಗೆ ಬಳಸುವಂತೆ ಪ್ರೋತ್ಸಾಹಿಸಲು ಸರ್ಕಾರ ತೆಗೆದುಕೊಂಡ ಕ್ರಮಗಳೇನು? | ಬೆಂಗಳೂರು ಮಹಾನಗರ ಸಾರಿಗೆ ಸಂಸ್ಥೆಯು ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ವ್ಯಾಪ್ತಿಯಿಂದ 25.0 ಕಿ.ಮೀ ವರೆಗೆ ಕಾರ್ಯಾಚರಣೆ ವ್ಯಾಪ್ತಿಯನ್ನು ಹೊಂದಿದ್ದು, ಪ್ರಸ್ತುತ ಸಂಸ್ಥೆಯು ಪ್ರತಿದಿನ 6201 ಅನುಸೂಚಿ/ಬಸ್ಸುಗಳಲ್ಲಿ 69695 ಸುತ್ತುವಳಿಗಳೊಂದಿಗೆ 13.26ಲಕ್ಷ ಕಿ.ಮೀಗಳ ಕಾರ್ಯಾಚರಣೆಯನ್ನು ಸಾರ್ವಜನಿಕ ಪ್ರಯಾಣಿಕರ ದಟ್ಟಣೆ ಮತ್ತು ಬೇಡಿಕೆಗನುಗುಣವಾಗಿ ದಿನದ ಎಲ್ಲಾ ಸಮಯದಲ್ಲಿ ಸಾರಿಗೆ ಸೇವೆಯು ಲಭ್ಯವಾಗುವಂತೆ ವಿವಿಧ ಪಾಳಿಗಳಲ್ಲಿ ಆಚರಣೆಗೊಳಿಸಲಾಗುತ್ತಿದೆ.<br><br>ಪಾಳಿವಾರು ವಿವರಗಳು ಈ ಕೆಳಕಂಡಂತಿವೆ.<br><br>ವಿಧ — ಅನುಸೂಚಿ/ಬಸ್ಸುಗಳ ಸಂಖ್ಯೆ<br>ಪಾಳಿ — 1177<br>ಸಾಮಾನ್ಯ ಪಾಳಿ — 2084<br>ರಾತ್ರಿ ವಸತಿ ಪಾಳಿ — 2797<br>ರಾತ್ರಿ ಸೇವೆ — 143<br>**ಒಟ್ಟು — 6201** |

| | | |
|---|---|---|
| | | ಸಾರ್ವಜನಿಕ ಪ್ರಯಾಣಿಕರ ಸುಗಮ ಸಂಚಾರಕ್ಕಾಗಿ ಕೆಳಕಂಡ ಕ್ರಮಗಳನ್ನು ಕೈಗೊಳ್ಳಲಾಗಿರುತ್ತದೆ.<br>• 2018-19 ಸಾಲಿನಿಂದ ಇಲ್ಲಿಯವರೆಗು ಸಂಸ್ಥೆಯು 76 ಹೊಸ ಮಾರ್ಗಗಳನ್ನು ಪರಿಚಯಿಸಲಾಗಿರುತ್ತದೆ.<br>• 213 ಅನುಸೂಚಿಗಳನ್ನು ಸೇರ್ಪಡೆಗೊಳಿಸಲಾಗಿರುತ್ತದೆ.<br>• 2267 ಅನುಸೂಚಿಗಳ ಆಚರಣಾ ವೇಳೆಯನ್ನು (ಐಟಿಎಸ್ ಆಧಾರದ) ಹೆಚ್ಚಿಸಿ ಪರಿಷ್ಕರಿಸಲಾಗಿರುತ್ತದೆ.<br>• ಮೆಟ್ರೋ ರೈಲು ಸೇವೆಗಳಲ್ಲಿ ಪ್ರಯಾಣಿಸುವ ಪ್ರಯಾಣಿಕರಿಗೆ ಸಂಪರ್ಕ ಸಾರಿಗೆ ಸೌಲಭ್ಯವನ್ನು ಒದಗಿಸುವ ನಿಟ್ಟಿನಲ್ಲಿ 155 ಮೆಟ್ರೋ ಫೀಡರ್ ಸೇವೆಗಳನ್ನು ಕಾರ್ಯಾಚರಣೆಗೊಳಿಸುತ್ತಿದೆ.<br>• ಸಂಸ್ಥೆಯು ಸಾರ್ವಜನಿಕ ಪ್ರಯಾಣಿಕರ ಅನುಕೂಲಕ್ಕಾಗಿ ರಿಯಾಯಿತಿ ದರದಲ್ಲಿ ಮಾಸಿಕ ಪಾಸುಗಳನ್ನು, ದಿನದ ಪಾಸುಗಳನ್ನು, ವಿದ್ಯಾರ್ಥಿ ಸಮುದಾಯದ ಅನುಕೂಲಕ್ಕಾಗಿ ಉಚಿತ/ ಅತ್ಯಂತ ರಿಯಾಯಿತಿ ದರದಲ್ಲಿ ವಾರ್ಷಿಕ ವಿದ್ಯಾರ್ಥಿ ರಿಯಾಯಿತಿ ಪಾಸುಗಳನ್ನು ವಿತರಿಸುತ್ತಿರುತ್ತದೆ.<br>• ವಿಶೇಷ ಚೇತನ /ಅಂಧರಿಗೆ ಉಚಿತ / ರಿಯಾಯಿತಿ ದರದಲ್ಲಿ ವಾರ್ಷಿಕ ರಿಯಾಯಿತಿ ಪಾಸುಗಳನ್ನು ವಿತರಿಸಲಾಗುತ್ತಿದೆ ಹಾಗೂ ಸಂಸ್ಥೆಯ ಸೇವೆಗಳಲ್ಲಿ (ವಾಯುವಜ್ರ ಸೇವೆ ಹೊರತುಪಡಿಸಿ) 2 ಆಸನಗಳನ್ನು ಮೀಸಲಿರಿಸಲಾಗಿರುತ್ತದೆ.<br>ಮಹಿಳಾ ಪ್ರಯಾಣಿಕರ ಸುರಕ್ಷತೆಯ ನಿಟ್ಟಿನಲ್ಲಿ ಸಾಮಾನ್ಯ ವಾಹನಗಳಲ್ಲಿ 16 ಆಸನಗಳನ್ನು ಮೀಸಲಿರಿಸಲಾಗಿರುತ್ತದೆ. |

ಸಂಖ್ಯೆ: ಟಿಡಿ 30 ಟಿಸಿಕ್ಯೂ 2019

(ಡಿ.ಸಿ.ತಮ್ಮಣ್ಣ)
ಸಾರಿಗೆ ಸಚಿವರು